ಶ್ರೀ ಗುರು ಇಂದಿರೇಶ ದಾಸವರ್ಯ ವಿರಚಿತ

# ಶ್ರೀ ಕೃಷ್ಣಾರ್ಯ ಕಥಾಮೃತಸಾರ

(ಭಾಮಿನಿ ಷಟ್ಪದಿ)

## ಮಹಿಮಾ ಸಂಧಿ

ಶ್ರೀರಮಣ ನರಹರಿ ಪದ ಪಂ
ಕೇರುಹಂಗಳ ನಮಿಸಿ ಸಂತತ
ಭಾರತೀಶಾದ್ಯರಿಗೆ ವಂದಿಸಿ ಭೂರಿ ಭಕುತಿಯಲಿ।
ಧೀರ ಕೃಷ್ಣಾಚಾರ್ಯರ ಕಥಾಮೃತ
ಸಾರ ಜನರಿಗೆ ತಿಳಿಸುವಂದದಿ
ಚಾರು ಭಾಮಿನಿ ಪದ್ಯದೊಳು ವಿಸ್ತಾರ ಪೇಳುವೆನು ॥೧॥

ಸೂರಿಗಳು ವಾಗ್ದೋಶವೆಣಿಸದೆ ಅ
ಪಾರ ಮಹಿಮನ ಗುಣಗಳನು ಸ್ವೀ
ಕಾರ ಮಾಡಲಿ ಕರುಣದಿಂದಲಿ ತೋರಿದವ್ರೋಲ್ ಬರೆದನು।
ಪರಮ ಗುರು ಕೃಷ್ಣಾರ್ಯರಡಿಗಳಿ
ಗೆರಗಿ ಭಿನ್ನೈಸುವೆನು ಪ್ರತಿದಿನ
ಪ್ರಾಕೃತದಿ ಈ ಕೃತಿ ಸರಸವಾಗಲಿ ಮಂಗಳವ ಕೊಡು ಎಂದು ॥೨॥

ಆವ ದೇವರ ಅಂಶವು ಜಗ
ತೀವಲಯದೊಳಗೆಲ್ಲ ಚರಿಸಿದ
ಭಾವಿಸುತ ನೋಡಲ್ಕೆ ಬಗೆ ಬಗೆ ಭಾವ ತೋರಿದನೊ।
ಕೋವಿದಾಗ್ರಣಿ ಸತತ ತನ್ನನು




ಸೇವಿಸುವ ಭಕುತರಿಗೆ ಸೌಖ್ಯಗ
ಳೀವ ಈತನೊಳಿರುತಿಹನು ಶ್ರೀದೇವಿ ವಲ್ಲಭನು ॥ ೩ ॥

ಧರಣಿಯೊಳಗಾವ ದೇಶದಿ
ತಿರುಗಿ ನೋಡಲು ಈ ವಿಧದ ಮಹಿ
ಮರಿಗೆ ಸಮರಿಲ್ಲೆನುವರು ಶಾಸ್ತ್ರಗಳರಿತ ಯೋಗಿಗಳು ।
ಅರುಹಿದಾ ನುಡಿಗಳನು ಯೋಚಿಸು
ತಿರಲು ಸ್ವಪ್ನದಿ ಬಂದು ಎನಗೆ ನೀ
ದರುಶನವ ತೋರಿದುದ ಪೇಳುವೆ ವರ ಮಹಾತ್ಮೆಗಳಾ ॥ ೪ ॥

ಬಾದರಾಯಣ ದೇವ ರಚಿ
ಸಿದಗಾಧ ಶಾಸ್ತ್ರದ ತತ್ವಗ
ಳಾದರದಿ ಗುರುಗಳಿಗೆ ವಂದಿಸಿ ಓದಿದವನಲ್ಲಾ ।
ಶ್ರೀಧರನ ಶುಭಪ್ರತಿಮೆಗಳನಾ
ರಾಧಿಸುವರಿವರೊಡನೆ ಶಾಸ್ತ್ರಗ
ಳೋದಿ ವಾದಿಸಲೆಂದಿಗಾದರೂ ವಾದಿಗಳಿಗಳವಲ್ಲಾ ॥ ೫ ॥

ಭೃತ್ಯ ಜನರಿಗೆ ಬಂದಿರುವ ಅಪ
ಮೃತ್ಯುಗಳ ಪರಿಹರಿಸಿ ಗುರುಗಳ
ಮೃತ್ತಿಕಾ ಪಾದೋದಕಂಗಳನ್ನಿತ್ತು ಸಲಹಿದನೋ ।
ವ್ಯತ್ಯಯವು ಇನಿತಿಲ್ಲ ಇದರೊಳು ಆ
ತಥ್ಯ ಮಾತುಗಳಿಲ್ಲ ಈತನ
ಕೃತ್ಯ ಗೋಚರಿಸುವುದೆ ಬುಧರಿಗೆ ಸತ್ಯ ಪೇಳುವೆನು ॥ ೬ ॥

ಶ್ರೀಪತಿಯ ನನುದಿನದಿ ಭಜಿಸುವ
ತಾಪ ಸ್ತೋಮವೆನಿಸಿ ಈ ಭವ
ಕೂಪದೊಳು ತಾನಿದ್ದನು ತಲ್ಲೇಪವಿಲ್ಲದಲೇ ।




ಪಾಪಿಯೊಳಗಿಹ ಕಮಲದೆಲೆಯೊಳ
ಗಾಪ ಬಿಂದುಗಳಿದ್ದರೇನವು
ಪೋಪವಲ್ಲದೆ ಉದಕ ಜಲಜಕೆ ಲೇಪಿಸುವುದುಂಟೇ ॥ ೭ ॥

ಲೋಕದಲಿ ಕೃಷ್ಣಾರ್ಯರಡಿಯೊಳ
ಗೇಕ ಮಾನಸರಾಗಿ ಸಂತತ
ಹೋಕುವಲ್ಲದೆ ಇರುತಿಹರು ವಿವೇಕಿಗಳೆನಿಸುವರು ।
ಶ್ರೀಕಳತ್ರನು ಒಲಿದು ಅವರನು
ಸಾಕುವನು ಸಂಪದವ ಸಲಿಸುತ
ಸ್ವೀಕರಿಸದಲೇ ಇರುವವರೇ ಕಾಕು ಮಾನವರು ॥ ೮ ॥

ಪತಿತ ಪಾವನರಿವರ ಕಾಲದಿ
ಕತಿಪಯ ದಿವಸವಿದ್ದು ಬಳಿಯೊಳು
ಘೃತ ಸುಪಾಯಸ ಭಕ್ಷ್ಯಗಳ ಸಂತಸದಿ ಸವಿದುಂಡು ।
ವಿತತ ಮಹಿಮರ ಪಾದದಲಿ ಸ
ದ್ಗತಿಯ ಬಯಸದೆ ಧನಗಳಿ
ಸುತ ಮತಿವಿಹೀನನು ಸತ್ಪಥವ ಕಾಣದಲೆ ॥ ೯ ॥

ಶ್ರದ್ಧೆಯಲಿ ಶಿರಬಾಗಿ ಪ್ರಾರ್ಥಿಸ
ಲುದ್ಧರಿಪ ಮಹಾನುಭಾವರು
ತಿದ್ದಿ ಪೇಳಿದರೆನಗೆರಡು ಪ್ರಸಿದ್ಧ ಶ್ಲೋಕಗಳಾ ।
ಪದ್ಧತಿಯನರುಹಲಲ್ಲೇ ಪಾದಕೆ
ಬಿದ್ದು ಬಿನ್ನೈಸಿದೆನು ಮಹಿತರ
ಪದ್ಯಗಳು ರಹಸ್ಯವೆನಿಪವು ಅಪದ್ಧ ಮಾತಲ್ಲಾ ॥ ೧೦ ॥

ಆ ವಿಧಾತನ ಲೋಕ ಮೊದಲಾ
ದೀ ವಸುಧಿ ಪಾತಾಳದೊಳಗಿಹ
ಜೀವಿಗಳು ಪ್ರತಿದಿನ ಮಾಡುವ ಭಾವ ತಿಳಿದಿಹರೋ ।

ಈ ವಿಧದಪರೋಕ್ಷಿಗಳು ಮ
ತ್ತಾವ ದೇಶದೊಳಿಲ್ಲ ಶ್ರೀ ಹರಿ
ಸೇವಿಸುವ ನಿಜ ಭಕ್ತರೊಳಗಿವರಾರೋ ನಾ ಕಾಣೆ ॥ ೧೧ ॥

ಏಸು ದಿನದಲಿ ತನ್ನ ಸೇವಿಪ
ಭೂಸುರನಿಗೆ ಪೇಳಿದನು ನಿನ್ನ ಮನ
ದಾಸೆಯನು ಪೂರ್ಯೆಸುವೆನು ಎಂದೆನುತಾಸೆಯನು ತೋರಿ।
ಬ್ಯಾಸರಿಲ್ಲದೆ ಹರಿಯ ದಿನದುಪ
ವಾಸದಲಿ ತಿರುತಿರುಗಿ ಸ್ವಪ್ನದಿ
ಕಾಶಿ ಮೊದಲಾದ ಯಾತ್ರೆ ಮಾಡಿಸಿ ಸಂತೋಷ ಪಡಿಸಿದ ॥ ೧೨ ॥

ಓದನವೆ ಕ್ರಿಮಿಯಾಗಿ ತೋರುತ
ಭಾದಿಸಲು ಬಳಬಳಲಿ ಬಾಯ್ಬಿಡು
ತಾದರದಿ ಶಿರ ಬಾಗಿ ಬೇಡಲು ಅಗಾಧ ಮಹಿಮರನು।
ಪಾದ ಪದುಮವ ಭಜಿಸುತ
ನುದಿನ ಸಾಧಿಸಿದ ಉಚ್ಚಿಷ್ಟದಿಂದಲಿ
ವ್ಯಾಧಿಯನು ಪರಿಹರಿಸಿ ಸಲಹಿದ ಸಾಧು ಸಜ್ಜನರಾ ॥ ೧೩ ॥

ಕಲಿಮಲಾಪಹರೆನಿಪ ಗುರುಗಳ
ಪೊಳೆವ ಗಾತ್ರದ ಮುರುವು ಪೂಜಿಸೆ
ಕೆಲವು ದಿನಪೋದ ಬಳಿಕದು ಥಳಥಳಿಸುತಲೀ।
ಚೆಲುವ ಸಾಲಿಗ್ರಾಮವೆನಿಸಿತು
ತಿಳಿಯದಿವರುತ್ಕೃಷ್ಟ ಮಹಿಮೆಯು
ಜಲರುಹೇಕ್ಷಣ ತಾನೆ ಬಲ್ಲನು ಇಳೆಯೊಳಚ್ಚರವೂ ॥ ೧೪ ॥

ಮುರ ವಿರೋಧಿಯು ದ್ವಾಪರದೊಳವ
ತರಿಸಿ ಯಾದವರೊಡನೆ ಆಡುವ
ಕರಿವರದ ತಾ ಭಕ್ತ ಜನರುದ್ಧರಿಸಿದಂದದಲಿ।




ವರನಟನೆಯ ತೋರಿದಿಭ
ವರದ ರಾಘವ ಪುರದ ಪ್ರಭು ಸಂ
ತರಿಗೆ ಸದ್ಗತಿಯಿತ್ತ ಮಂಗಳ ಭರಿತ ಶುಭ ಚರಿತಾ ॥ ೧೫ ॥

ಭುವನದೊಳಗೀ ಗುರು ಕಥಾಮೃತ
ಸವಿಯು ಸುಜ್ಞಾನಿಗಳಿಗಲ್ಲದೆ
ಭವದೊಳಗೆ ಮುಳುಗಿರುವ ಮಾನವರಿಗಿದು ರುಚಿಯೇ ।
ನವ ವಿಚಿತ್ರದ ಚಾರು ವೀಣಯ ರ
ಸವು ಗಾಯಕರಲ್ಲದವರ
ಕಿವಿಯೊಳಗೆ ಬಾರಿಸೆ ಯಾವ ಸವಿಯು ತಿಳಿಯುವುದೇ ॥ ೧೬ ॥

ಸಿಂಧು ಶಯನರವಿಂದ ಲೋಚನ
ಅಂದಜಾಮಿಳ ವರ ವಿಭೀಷಣ
ಇಂದುಮುಖಿಯಳ ಮಾನರಕ್ಷಕ ಕಂದ ಧೃವಗೊಲಿದಾ ।
ವಂದಿಮಾಗಧ ಸೂತ ಸನಕ ಸ
ನಂದನರ್ಚಿತ ಪಾದ ಶ್ರೀ ಗುರು
ಇಂದಿರೇಶನ ದಯದಿ ಮಹಿಮಾ ಸಂಧಿ ಪೇಳಿದೆನೋ ॥ ೧೭ ॥

**ಇಂತು ಇಭರಾಮಪುರ ನಿಲಯ ಶ್ರೀ ಕೃಷ್ಣಾರ್ಯ ಕಥಾಮೃತಸಾರ**
**ಮಹಿಮಾ ಸಂಧಿ ಮುಗಿದುದು.**






ಶ್ರೀ ಗುರು ಇಂದಿರೇಶ ದಾಸವರ್ಯ ವಿರಚಿತ

# ಶ್ರೀ ಕೃಷ್ಣಾರ್ಯ ಕಥಾಮೃತಸಾರ

(ಭಾಮಿನಿ ಷಟ್ಪದಿ)

## ಶ್ರೀ ಶೃಂಗಾರ ಸಂಧಿ

ಶ್ರೀರಮಣ ನರಹರಿಯ ಪದ ಪಂ
ಕೇರುಹಂಗಳ ನಮಿಸಿ ಸಂತತ
ಭಾರತೀಶಾಧ್ಯರಿಗೆ ವಂದಿಪೆ ಭೂರಿಭಕುತಿಯಲಿ ॥

ಸುಂದರಾಂಗನ ಪದನರುಶ್ವರ
ದಿಂದುಮಂಡಲ ಘನ ಸುಕಾಂತಿಯ
ಕುಂದಿಸುತ ಜಗದೊಳಗೆ ಸಮವಿಲ್ಲೆಂದು ರಾಜಿಸಿತು ।
ವಂದಿಸುವೆನನವರತ ಸುರ ಪದ
ದ್ವಂದ್ವ ಭಕುತಿಯಿಂದಮಲ ಮನದಿ ಸು
ಗಂಧ ತನು ಶೃಂಗಾರ ವರ್ಣಿಸುಪೆ ಮಂದಮತಿ ನಾನು ॥ ೧ ॥

ಪದುಮದಂದದಿ ನಯನ ಸಂಪಿಗೆಯ
ತುದಿಯ ತೆರೆ ನಾಶಿಕವು ಪೊಳೆಯು
ವ ದಂತುಗಳು ದಾಡಿಯದ ಬೀಜಗಳು ಹೃದಯ ವಿಸ್ತಾರ ।
ಉದರ ಕದಳೀ ಫಲವು ವಾಪೀ
ಸದೃಶ ನಾಭಿ ಮಧ್ಯ ಮದ್ಕುಮುದ
ಸಮದಮಲಾತ್ಮಕನವಯವಗಳೀ ವಿಧದಿ ತೋರಿದವು ॥ ೨ ॥




ಶಿರದಿ ಶೋಭಿಪ ಶಾಲು ಭರ್ಜರಿ
ವರ ಮಹೇಶರು ಒಲಿದು ಕೊಟ್ಟಿಹ
ಹಿರಿದು ಬೆಲೆಗಳು ಉಳ್ಳ ವಜ್ರದ ಕರ್ಣ ಭೂಷಣವು ।
ಕೊರಳೊಳಗೆ ನಲಿನಲಿವ ಮೌಕ್ತಿಕ
ಸರದ ಎಳೆಗಳು ಮೂರು ಅನುಪಮ
ಥರಥರದ ಮಣಿ ಖಚಿತ ತುಳಸಿಯ ಸರವು ಶೋಭಿಸಿತು ॥ ೩ ॥

ತೋರ ಮುತ್ತಿನ ಹಾರದೊಳಗಿಹ
ಪಾರ ಮೌಲ್ಯದ ಹಾರ ಪದಕದ
ಚಾರು ವಿದ್ಯುತಿ ನೋಡಿ ಶಶಿತಾ ಸೇರಿದಾಗಸಕೇ ।
ಭಾರಿ ವಜ್ರದ ಹರಳು ಕೆತ್ತಿದ
ಮೀರಿ ಮಿಂಚಿನ ರತ್ನದಿ ಮಿನುಗುವ
ಮೂರೆಳೆಯ ಉಡಿದಾರ ಕಟಿ ಶೃಂಗಾರದಂತಿಹುದೂ ॥ ೪ ॥

ಎತ್ತ ನೋಡಿದರತ್ತ ಝುಗಝುಗಿ
ಸುತ್ತ ಕಂಠದಿ ಶೋಭಿಸುವ ಒಂ
ಬತ್ತು ಎಳೆಗಳ ಚಂದ್ರ ಹಾರವು ಮತ್ತು ಪೇಳುವೆನು ।
ತಪ್ತ ಕಾಂಚನದಿಂದ ರಚಿಸಿದ
ಜತ್ತಿಯಿಂದಲಿ ಇರುವ ಕಂಠಿಯು
ಅತ್ಯಧಿಕ ನವರತ್ನ ಪದಕದ ಪುತ್ಥಳೀ ಸರವು ॥ ೫ ॥

ದಾತ ದಕ್ಷಿಣ ಕರದಿ ಧರಿಸಿದ
ಜಾತ ರೂಪದ ಪಾಂಚದೊಳು ಶ್ರೀ
ಮಾತರೀಶ್ವನ ಮೂರ್ತಿ ನಲಿಯುತ ಪ್ರೀತಿಯಿಂದ ಹರೀ ।
ಭೂತಳದಲ್ಲಿ ಇನ್ನು ಕಾಣೆನು
ಈ ಥರದ ವಿಭತೀಶಯ ಪುರ
ಹೂತನಂದದಲನುಭವಿಸಿದನು ಖ್ಯಾತ ಕೃಷ್ಣಾರ್ಯ ॥ ೬ ॥







ಎರಡನೇ ಬೆರಳೊಳಗೆ ರಾಜಿಪ
ಚರಡಿ ಹಚ್ಚಿದ ರತ್ನದುಂಗರ
ಹಿರಿದು ಪಚ್ಚದ ಮುದ್ರಿಕೆಯು ನಡುತರದ ಬೆರಳಿನೊಳು ।
ಅರುಣನನು ಧಿಕ್ಕರಿಪ ಕೆಂಪಿನ
ಹರಳಿನುಂಗರ ಅನಾಮಿಕದೊಳು
ಕಿರಿಯ ಬೆರಳಿಗೆ ಭಾರತೀಶನ ಗುರುತಿನುಂಗರವೂ ॥ ೭ ॥

ಚಾರುತರ ಮಹಿಸೂರು ಪುರದೊಳು
ದಾರು ಮಹಿಮನು ಮೆರೆದ ವೈಭವ
ಸಾರಲೆನ್ನೊಶವಲ್ಲ ವೆಂದಿಗೂ ಅಪಾರವಾಗಿಹುದು ।
ಪೌರ ಜನಸಂದಣಿಯು ಅದ್ಭುತ
ಭೋರಿಡುವ ವಾದಿತ್ರಗಳು ಹೂಂ
ಕಾರವಾದ ದಿಗ್ಗಜದ ಘನ ಶೃಂಗಾರವೇನೆಂಬೆ ॥ ೮ ॥

ನೋಟಕರು ನರ್ತಕರು ವಾದ ವಾದ್ಯ
ದಾಟಪ್ರಿಯರು ಅಲ್ಲಲ್ಲಿ ವೀಣೆಯ
ಮೀಟುವ ಸಂಗೀತ ಮಾಲ್ಪ ಥಾಟಿ ವೀಧಿಯೊಳು ।
ಹಾಟಕದ ಕಡೆಯವರು ವಿಭವಕೆ
ಸಾಟಿ ಈ ಜಗದೊಳಗೆ ಕಾಣೆನು
ಬೂಟಕದ ಮಾತಲ್ಲ ದೇಶಿಕರಾಜ ಸೋಜಿಗವೋ ॥ ೯ ॥

ಉತ್ತಮೋತ್ತಮವೆನಿಪ ಶ್ವೇತ
ಛತ್ರಗಳು ಎಡಬಲದಿ ಬೀಸುವ
ಚಿತ್ರ ಕೆತ್ತಿದ ಕನಕದ್ದಿಂಡಿಯ ವಿಚಿತ್ರ ಚಾಮರವು ।
ಮುತ್ತಿನಾರತಿ ತಂದು ಎದುರಿಗೆ
ಎತ್ತಿ ಬೆಳಗುವ ಸುದತಿಯರ ಬಹು
ವತ್ತಡಿಯ ಮಹಿಮೆಯನು ಸ್ತುತಿಸುವ ಭಕ್ತರೆಂತಿಹರೋ ॥ ೧೦ ॥







ನೀಲ ಮೌಕ್ತಿಕ ಮಣಿಗಣಂಗಳ
ಜಾಲರಿಯು ಕಟ್ಟಿರುವ ಚಿತ್ರದ
ಮೇಲು ಮಹಡಿಯೊಳು ಅಮಿತಕಾಂತಿಯ ಸಾಲುಗನ್ನಡಿಯಾ ।
ಲೀಲೆ ವಿಧ ವಿಧ ತೋರುತಲಿ ಕರು
ಣಾಲವಾಲನು ಶೋಭಿಸಲು
ಭೂಪಾಲನರಮನೆ ರಾಜಿಸಿತು ತ್ರಿದಿಶಾಲಯದ ತೆರದಿ ॥ ೧೧ ॥

ಈ ಪರಿಯ ವೈಭವಗಳಿಂದವ
ನೀ ಪತಿಯು ಕರೆತರಲು ಸದನದಿ
ವ್ಯಾಪಿಸಿಹ ಪರಿಮಳವ ನೋಡುತ ಭೂಪ ಬೆರಗಾಗಿ ।
ತಾಪ ಸ್ತೋಮರಡಿಗೆ ವಂದಿಸಿ
ಶ್ರೀಪತಿಯು ನಿಜ ಭಕುತರೊಳು ಬಿಂ
ಬಾಪರೋಕ್ಷಿಗಳರ್ಚಿಸಿದ ಸಕಲೋಪಚಾರದಲಿ ॥ ೧೨ ॥

ತಂದ ದಿವ್ಯೋದಕದಿ ತೊಳದಡಿ
ಗಂಧ ಲೇಪಿಸಿ ನೊಸಲೊಳಕ್ಷತೆ
ಕಂಧರದಿ ಮಕರಂದ ಮಾಲೆ ಸುಗಂಧ ತೈಲದೊಳು ।
ಕುಂದಣಾಭರಣಗಳು ವಸ್ತ್ರಗ
ಳಿಂದ ಪೂಜಿಸಿ ಕೃಷ್ಣ ಭೂಪತಿ
ಇಂದಿಗೆನ್ನನು ಧನ್ಯನೆನಿಸಿದರೆಂದು ಪ್ರಾರ್ಥಿಸಿದಾ ॥ ೧೩ ॥

ಏನು ಧನ್ಯರೊ ಕ್ಷಿತಿಪರಿಂದಿವ
ರೇನು ಮಾನ್ಯರೋ ಲೋಕದೊಳ್
ಎಣೆಗಾಣೆ ಈ ವಿಭವಗೋಚರವೆ ಸುಜ್ಞಾನಿಗಳಿಗೇ ।
ಪ್ರಾಣದೇವರ ಪ್ರೀತಿಪಡೆದಿಹ
ದಾನಿ ಕೃಷ್ಣಾರ್ಯರಿಗೆ ಈ ಬಹು
ಮಾನ ಸುಲಭವಲ್ಲವೆ ಪೂರ್ಣರಿಗೇನು ದುಸ್ತರವೋ ॥ ೧೪ ॥







ಕಲ್ಲು ಕನಕವ ಮಾಡುವರು ಮೃದು
ಮಲ್ಲಿಗೆಯ ಮೇಲಾದ್ರಿ ಭಾರವ
ನಿಲ್ಲಿಪರು ಜಲ ಕಡೆದು ಬೆಣ್ಣೆಯನಲ್ಲಿ ತೆಗೆಯುವರು ।
ಒಳ್ಳೆ ಸಿಕತವ ಪೀಡಿಸುತದ
ರಲ್ಲಿ ತೈಲವ ತೆಗೆಯ ಬಲ್ಲರು
ಬಲ್ಲಿರುವ ಪ್ರಾಜ್ಞರಿಗೆ ಅಸಾಧ್ಯಗಳಿಲ್ಲ ಜಗದೊಳಗೆ ॥ ೧೫ ॥

ಕ್ಷೋಣಿಪತಿಗಿಷ್ಟಾರ್ಥ ಸಲಿಸಿ ಮ
ಹಾನು ಭಾವ ವಿರಾಜಿಸುತ ಸ
ನ್ಮಾನವನು ಸ್ವೀಕರಿಸುತಲಿ ಕೈಗಾಣಿಕೆಯ ಕೊಂಡು ।
ಮಾನ ಅವಮಾನ ಭಗವದ
ಧೀನ ವೆನುತಲಿ ತಿಳಿದು ಹಿಗ್ಗದೆ
ಏನು ಆದುದದೆಲ್ಲಾ ಆ ಪವಮಾನಗರ್ಪಿಸಿದಾ ॥ ೧೬ ॥

ಪುಂಡರೀಕ ದಳಾಯತಾಕ್ಷನ
ಹಿಂಡಿನೊಳು ಹಿರಿದೆನಿಸುತಲಿ ಭೂ
ಮಂಡಲವ ದಿಗ್ವಿಜಯಗೈದಿದ ಪಂಡಿತಾಗ್ರಣಿಯ ।
ಕಂಡು ಕೂಗಾಡಿದರೆ ಪರಮೋ
ದ್ದಂಡ ಮಹಿಮೆಗೆ ಕುಂದು ಬಾರದು
ಕೆಂಡ ಉಡಿಗಟ್ಟಿದವನೋಲಿಹ ದುಂಡು ತೀರಿಸುವ ॥ ೧೭ ॥

ಕಂತು ಜನಕನು ನಲಿದು ನಲಿಸುತ
ಅಂತರಂಗದೊಳಿದ್ದು ಇರುವ ದಿ
ಗಂತದೊಳು ವಿಶ್ರಾಂತರೆನಿಸಿದಚಿಂತ್ಯ ಮಹಿಮರನು ।
ಇಂತು ಕರಣವ ಪಡೆದ ಭಜಕರ
ಚಿಂತಿತಾರ್ಥಗಳಿತ್ತ ಸದ್ಗುಣ
ವಂತ ಗುರುವರೆಂಥ ಘನ ಶ್ರೀಮಂತ ದಯವಂತ ॥ ೧೮ ॥




ಸಧಮಲಾಂಗನ ಪದ ಸ್ಮರಿಸೀ
ವಿಧದ ಶೃಂಗಾರದ ಸುಪದ್ಯಗಳ
ಉದಯ ಕಾಲದಿ ಪಠಿಸಲಿಹಪರತ್ರಗಳಲ್ಲಿ ಸೌಖ್ಯಗಳು ।
ಪದುಮನಾಭನು ಸಕಲ ಸಂಪದ
ಒದಗಿಸುವನನುಮಾನ ಸಲ್ಲದು
ಹೃದಯ ನಿರ್ಮಲರಾಗಿ ಕೇಳುತ ಬುಧರು ನಲಿಯುವರು ॥ ೧೯ ॥

ಒಂದು ಅರಿತವನಲ್ಲ ನಾ ಮನ
ಬಂದಂತೆ ಶೃಂಗಾರ ಸಂಧಿ ಪೇಳಿದೆ
ಒಂದೆ ಮನದಲಿ ಸಜ್ಜನರು ಕೃಪೆಯಿಂದಲಾಲಿಪುದು ।
ವಂದನೆಯ ಮಾಡುತ್ತಾ ಪದೆ ಪದೆ
ಮುಂದೆ ಸಾದರದಿಂದ ವರ ಗುರು
ಇಂದಿರೇಶನ ಸ್ಮರಿಸಿ ಭಕುತಿಯ ಸಂಧಿ ಪೇಳುವೆನು ॥ ೨೦ ॥

**ಇಂತು ಇಭರಾಮಪುರ ನಿಲಯ ಶ್ರೀಕೃಷ್ಣಾರ್ಯ ಕಥಾಮೃತಸಾರ**
**ಶೃಂಗಾರ ಸಂಧಿ ಮುಗಿದುದು**



ಶ್ರೀ ಗುರು ಇಂದಿರೇಶ ದಾಸವರ್ಯ ವಿರಚಿತ

# ಶ್ರೀ ಕೃಷ್ಣಾರ್ಯ ಕಥಾಮೃತಸಾರ

(ಭಾಮಿನಿ ಷಟ್ಪದಿ)

## ಭಕ್ತಿ ಸಂಧಿ

ಶ್ರೀರಮಣ ನರಹರಿಯ ಪದ ಪಂ
ಕೇರುಹಂಗಳ ನಮಿಸಿ ಸಂತತ
ಭಾರತೀಶಾಧ್ಯರಿಗೆ ವಂದಿಪೆ ಭೂರಿಭಕುತಿಯಲಿ ॥

ಕಾಮ ಕ್ರೋದಾದಿಗಳ ಜಯಸಿದ
ಕಾಮಿತಪ್ರದ ಕರುಣಿ ಸದ್ಗುಣಿ
ಧಾಮ ಸಂತತ ಪಠಿಸುತಿಹ ಶ್ರೀರಾಮ ಮಂತ್ರವನೂ ।
ಯಾಮ ಯಾಮಕೆ ಭಾವ ಶುದ್ಧದಿ
ಈ ಮಹಾತ್ಮನ ವಿಮಲ ಪದಗಳ
ನೇಮದಿಂದರ್ಚಿಸಲು ಒಲಿಯುವ ಶ್ರೀಮನೋಹರನು ॥ ೧ ॥

ಸ್ನಾನ ಜಪ ತಪವೆಲ್ಲ ಮಾಡಿದ
ರೇನು ಫಲ ಶಾಸ್ತ್ರಗಳ ಪಠಿಸಿದ
ರೇನು ಫಲ ಡಾಂಭಿಕತನದಲಿ ಅನುಸಂಧಾನವಿಲ್ಲದಲೇ ।
ಸಾನುರಾಗದಿ ಇವರ ಮಹಿಮೆಯ
ಗಾನ ಮಾಡುತ ಕುಣಿದು ಹಿಗ್ಗಲು
ಶ್ರೀನಿವಾಸನ ಪೂಜೆ ಸುರನದಿ ಸ್ನಾನವೆನಿಸುವುದು ॥ ೨ ॥

ಈತ ಧರಿಸಿದ ಮಾಲೆ ಲಕ್ಷ್ಮೀ
ನಾಥಗದು ಉಯ್ಯಾಲೆಯೆನಿಪುದು




ಈತನಾರ್ಜಿತ ನಾಮ ಸುಮನಸ ವ್ರಾತಕತಿ ಪ್ರೇಮ ।
ಈತ ಮಾಡಿದ ಕೃತ್ಯ ಸಂತತ
ಮಾತರಿಶ್ವನ ಮನಕೆ ಸಮ್ಮತ
ಈತನಡಿಗಳ ಧ್ಯಾನ ಸುಖ ಇತ್ಯಾತಕನುಮಾನು ॥ ೩ ॥

ವನಜನಾಭನ ದಾಸರಿಗೆ ನಿಜ
ಮನ ಎನಿಸಿ ಪೂಜಿಸುವವರು
ಘನ ಮಹಾತ್ಮನ ಸೇವೆ ದೊರೆವುದು ಜನಕೆ ದುರ್ಲಭವೋ ।
ಪ್ರಣತ ಕಾಮದನೆನಿಪ ಗುರುಪದ
ವನರುಹಂಗಳ ಸ್ಮರಿಸುವಂದದಿ
ಮನಸು ಕೊಡು ಎಂದ್ದರಿಗೆ ಪ್ರಾರ್ಥಿಪೆ ಜನುಮ ಜನುಮದಲಿ ॥ ೪ ॥

ಸೂರಿ ಕೃಷ್ಣಾರ್ಯರ ಕಥಾಮೃತ
ಸಾರ ಪಾನದಿ ಸುಖಿಸದಲೆ ಸಂ
ಸಾರ ಸುಖ ರುಚಿ ಎಂದು ಮನದೊಳು ಪೂರ ತಿಳಿದವನು ।
ನೀರಡಿಸಿ ತಿರುತಿರುಗಿ ಗಂಗಾ
ತೀರದಲಿ ತಾ ಬಂದು ಚಿಲುಮೆಯ
ನೀರು ಕುಡಿದವನಂತೆ ಪಶುಪರಿವಾರನೆನಿಸುವನು ॥ ೫ ॥

ಅರಿವಿದೂರರ ಕರುಣ ಪಾತ್ರಗೆ
ದುರಿತಗಳ ಭಯವಿಲ್ಲ ಜಗದೊಳು
ತಿರುಕರಿ ಭಯವುಂಟೆ ಸಿಂಹದ ನೆರೆಯೊಳಿದ್ದವಗೆ ।
ಅರೆಗಳಿಗೆ ಬೆಂಬಿಡದೆ ಭಕುತರ
ಪೊರೆವ ಕರುಣಾ ಶರಧಿ ಎನಿಪರ
ಚರಣ ಪಂಕಜ ಯುಗಕೆ ನಮಿಸುವೆ ನಿರುತ ಶಿರಬಾಗಿ ॥ ೬ ॥

ರವಿಯ ಮಂಡಲಕೆಸೆದ ಮೃತ್ತಿಕೆ
ಭವಿಯ ಮಾಡಿದವನ ಕಣ್ಗಳು
ಕವಿವುವಲ್ಲದೆ ಹಾನಿಯಾಗದು ಸವಿತೃ ಮಂಡಲಕೆ ।







ಕವಿವರೇಣ್ಯರ ಮಹಿಮೆ ನಿಂದಿಸ
ಲವರಿಗಾಗುವುದೇನು ಕೊರತೆಯು
ಜವನ ಜನ ಕರೆದೊಯ್ದು ನರಕದೊಳವನ ಭಾದಿಪರೋ ॥ ೭ ॥

ಕುಜನ ತತಿ ವಿದೂರ ವಿಬು
ಧ ಜನ ಪ್ರೀಯ ವಿಸ್ವಾಸ ಸಂತತ
ನಿಜವೆನಿಪ ರತ್ನಾಕರ ಸುಜನ ತಾಪಹರ ।
ವಿಜಯ ಸಾರಥಿ ಪದ ಸಮಾಶ್ರಯ
ದ್ವಿಜನಿಕರ ಪರಿಪಾಲ ಸುಮಹಿತ
ವ್ಯಜನಹರ ಕೃಷ್ಣಾರ್ಯ ಗುರುಪದ ಭಜಿಸಿ ಪ್ರಾರ್ಥಿಸುವೆ ॥ ೮ ॥

ನಿಗಮ ವೇದ್ಯನ ನಿರತಿಶಯ ಮಹಿ
ಮೆಗಳ ಕೊಂಡಾಡುತಲಿ ಪನ್ನಗ
ನಗನೊಳಗೆ ಏಕಾಗ್ರ ಚಿತ್ತದಿ ಮಿಗೆ ಹರುಷದಿಂದಾ ।
ಬಿಗಿದು ಶ್ವಾಸೋಚ್ಛ್ವಾಸ ಸಹ
ಸ್ರಗಳ ಸಮತಪವೆಸಗಿ ತವಕದಿ ಕೈ
ಮುಗಿಯೆ ಕೈವಲ್ಯದ ಸುಸಾಧನ ಜಗದಿ ಜನಿಸಿದನು ॥ ೯ ॥

ದೀಕ್ಷದಿಂದಲಿ ಅಹಿಕ ಸುಖವ
ಪೇಕ್ಷಿಸದೆ ಗುರುಪದಕೆ ವರ ಗಂ
ಧಾಕ್ಷತೆಯಿಂದ ಅರ್ಚಿಸೆ ಲಕ್ಷೀವಲ್ಲಭನು ।
ಮೋಕ್ಷದಾಯಕರೆನಿಪರಿವರ ಕ
ಟಾಕ್ಷ ವೀಕ್ಷಣ ಮೋಕ್ಷಸಾಧನ
ಸಾಕ್ಷಿ ರಾಮಾಹ್ವಯರು ಯೋಗಿಗಳಾ ಕ್ಷಮಾಬ್ದಿಗಳು ॥ ೧೦ ॥

ಕಡು ದಯಾಂಬುಧಿ ರಾಮ ನಾಮಕ
ರೊಡೆಯ ಶ್ರೀ ಕೃಷ್ಣಾರ್ಯ ಗುರುಗಳು
ಪೊಡವಿ ಬಲಪಾತಾಳಲೋಕದಿ ಬಿಡದೆ ಗಡಬಡಿಸಿ ।
ಮಿಡುಕುತಿರೆ ಮೈಸೂರು ಗ್ರಾಮದ







ಒಡೆಯ ನಿಜ ಭಕುತರನು ನೋಡುತ
ಸಡಗರದಿ ಗುರುಪದವ ಭಜಿಸುತ ಧೃಡದಿ ನಿಲಿಸಿಹರೋ ॥ ೧೧ ॥

ಉದರಗೋಸುಗ ವಿವಿಧ ಕರ್ಮವ
ಮುದದಿ ಲಾವಕರೊಡನೆ ಮಾಡದೆ
ಹೃದಯ ನಿರ್ಮಲರಾಗಿ ದಶಮತಿಯ ಮೃದು ಶಾಸ್ತ್ರಗಳಾ।
ಮೊದಲಿನಿಂದಲೆ ಓದಿ ಬರೆಯದೆ
ಮದಡಮತಿ ಎಂದೆನಿಸೆ ಮದ್ಗುರು
ವದನದೊಳು ನಿಂತು ನುಡಿಸಿದ ಸದಯ ನೀ ಕೃತಿಯಾ ॥ ೧೨ ॥

ಚಾರು ಪದ ಗಂಭೀರ ಕವಿತೆಯ
ಸಾರವನು ನಾನರಿಯೆ ಜಡಮತಿ
ಸೂರಿಗಳು ತಾತ್ಸಾರ ತಿಳಿದರು ಪೂರ ಬಲ್ಲವರು।
ಮೀರಿ ಬರೆ ಪೂರ್ವಿಗಳ ಶಬ್ದ ಗಂ
ಭೀರ ವಾರಿಧಿ ಮತಿಯ ಮಂದಿರ
ಪೂರ ತಿಳಿವುದು ದಾಟಿರುವ ಕಪಿ ವೀರರರಿತವರೇ ॥ ೧೩ ॥

ಹೊಳೆವ ಸಾಲಿಗ್ರಾಮ ಮೊದಲಾದ
ಹಲವು ವಸ್ತುಗಳಲ್ಲಿರುತಿಹ
ಜಲಜನಾಭನ ರೂಪ ಗುಣಗಳ ಸತತ ಸಂಸ್ಮರಣೆ।
ನಲಿದು ಮಾಡುತಲುದದಿಶಯನನ
ಒಲಿಸಿ ವ್ಯಾಪ್ತೋಪಾಸಕರುಯೆನಿಸಿ
ಇಳೆಯೊಳು ಸಂಚರಿಪರಿವರೊಳು ಕಲುಷವಿನ್ನುಂಟೆ ॥ ೧೪ ॥

ಭರತಖಂಡದಿ ಜನಿಸಿ ಶಕ್ತ್ಯೆನು
ಸರಿಸುತಲಿ ಸದ್ಭಕ್ತಿ ಭಾವದಿ
ನಿರುತ ಮಾಡಿದಕರ್ಮ ಶ್ರೀ ಹರಿಗುರುಗಳಡಿ ಪೂಜಾ।
ಪರುವತದ ವೊಲಹುದು ಪುಣ್ಯಕೆ







ಪರಿಮಿತಿಯಿಲ್ಲೆಂದೆನಿಸಿಕೊಂಬುದು
ಅರುಹಿದವು ಶಾಸ್ತ್ರಗಳು ಭಕುತಿಗೆ ಸರಿಯೆ ಇಲ್ಲೆನುತಾ ॥ ೧೫ ॥

ಘನ ಮಹಾತ್ಮರ ಸೇವಿಸುವ ಸ
ಜ್ಜನರ ಬಗೆ ತಿಳಿಯದಲೆ ಕುಹಕಗಳ
ನೆಣಿಸುತಲಿ ಕೆಲಜನರು ಸೇವಕರೆನಿಸಿ ಕೊಂಬುವರು ।
ಮನದಿ ಭಕುತಿಯ ತೊರೆದು ಲೌಕಿಕ
ವನನುಸರಿಸಿ ಮಾಡಿದ ಸುಕರ್ಮವು
ಘನ ಗಿರಿಗೆ ಪಾಷಾಣ ಮೃತ್ತಿಕೆ ದಣಿದು ಪೊತ್ತಂತೆ ॥ ೧೬ ॥

ನಿತ್ಯ ಜಪ ತಪ ಹೋಮಗಳು
ಶೃತ್ಯುಕ್ತ ವಿಧಿಗಳ ಬಿಡದೆ ಮಾಡಲು
ಮರ್ತ್ಯರಿಗೆ ಸದ್ಗತಿ ಆಹುದೇ ಗುರುಭಕ್ತಿಯಿಲ್ಲದಲೇ ।
ಸತ್ಯ ತಿಳಿವುದು ಹರಿಯು ಮುನಿದೊಡೆ
ಭೃತ್ಯನನ್ನು ಪಾಲಿಪನು ಗುರುವರ
ಮುಕ್ತ ದೈಶಿಕ ಮುನಿಯಿರಲಿ ಹರಿ ಕಣ್ಣೆತ್ತಿ ನೋಡುವನಾ ॥ ೧೭ ॥

ನಿರುತ ಮಾತಾಪಿತೃಗಳಲಿ ವರ
ಗುರುಗಳಲಿ ಸದ್ಭಕ್ತಿ ಭಾವದ
ಲಿರುವ ಹರಿ ಬ್ಯಾರಿಲ್ಲೆನುತ ಅರಿತ ಮಾನವನು ।
ಪರಿಪರಿಯ ದುಃಖಗಳ ಕೂಪದಿ
ಹೊರಳಿ ದುಸ್ತರವೆನಿಸಿ ತೋರುವ
ಕರೆಕರೆಯ ಸಂಸಾರವೆಂಬುವ ಶರಧಿ ದಾಟುವನು ॥ ೧೮ ॥

ಮರುತ ಶಾಸ್ತ್ರವನೋದಿ ಅದರೊಳ
ಗಿರುವ ಸಾರವ ತಿಳಿದು ಶ್ರೀ ಹರಿ
ಗುರುಗಳಲಿ ದೃಢ ಭಕುತಿ ಮಾಡದೆ ಜರಿದು ಸತ್ಕರ್ಮ ।







ಮರುಳ ಜನರನನುಸರಿಸಿ ಸಂತತ
ತಿರುತಿರುಗಿ ವ್ಯರ್ಥಾಯು ಕಳೆದೆನು
ಗುರುಗಳೆನ್ನನು ಕರಪಿಡಿದು ಸಂತರಿಸಬೇಕೆಂಬೆ ॥ ೧೯ ॥

ನೀಲ ನೀರದ ಶ್ಯಾಮ ಲಕ್ಷ್ಮೀ
ಲೋಲನಂಘ್ರಿಯ ಭಜಿಸುತಲಿ
ಸಚ್ಛೀಲರೆನಿಸುವ ಸುಜನರ ಕಂಡವಹೇಳನವ ಮಾಡಿ।
ಕೂಳಿಗೋಸಗ ಪೋಗಿ ಪರರನು
ವಾಲೈಸಿ ಮನೆಮನೆಯ ಚರಿಸುತ
ಹಾಳು ಹರಟೆಗಳಾಡಿ ಸ್ತುತಿಸಿದೆ ಕೀಳು ಮಾನವರಾ ॥ ೨೦ ॥

ಭೂತಳದಿ ನಾ ಜನಿಸಿ ಅಶನಕ
ರಾತಿ ಭೂಮಿಗೆ ಭಾರವೆನಿಸುತ
ಈ ತೆರದ ಕಡು ಪಾಪಿಗಳ ವ್ರಾತಗೊಳಗಾಗಿ।
ಅತುರದಿ ಬಳಬಳಲಿ ಪುಡು
ಕುತ ನಾಥರಿಗೆ ಆಧಾರ ಈತನೆ
ಪ್ರೀತಿಯಲಿ ಉದ್ಧರಿಸಿ ಸಲಹುವ ದಾತರನು ನಾ ಕಾಣೆ ॥ ೨೧ ॥

ಸಾದರದಿ ಸಚ್ಛಾಸ್ತ್ರಗಳ ಸಂ
ಶೋಧಿಸುತ ನೋಡಲು ಮಹಿಯೊಳು
ಆದಿ ಗುರು ಕೃಷ್ಣಾರ್ಯರೆನುವರು ಸಾಧು ಯೋಗಿಗಳು।
ಬೋಧಿಸುವ ಗ್ರಂಥಗಳೊಳಗೆ ಪ್ರತಿ
ಪಾದಿತರಿಗಭಿವಂದಿಸುವೆ ದೃಢ
ವಾದ ಭಕುತಿಯನ್ನಿತ್ತು ಸಲಹಲಿ ಪಾದ ಪದುಮದಲೀ ॥ ೨೨ ॥

ಈ ವಸುಧೆಯೊಳಗುಳ್ಳ ಜೀವಿಗ
ಳುವಾವ ಸತ್ಕರ್ಮಗಳ ಮಾಡಲಿ
ಭಾವ ಶುದ್ಧದಿ ತಿಳಿವುದ್ಧರಿ ಗುರು ಸೇವೆಯೆನ್ನುತಲಿ।




ಕೋವಿದರು ಎಂದೆನಿಸಿ ಕೊಳ್ವರು
ಪಾವನಾತ್ಮಕರೆನಿಪರವರಿಗೆ
ಕಾವನಯ್ಯನು ತಾನೆ ಒಲಿದು ಈವ ಪುರುಷಾರ್ಥ ॥ ೨೩ ॥

ಈ ಮಹಾ ಕಥಾಮೃತಸಾರ ದಿನದಿನ
ಅಮಲತರ ಭಕುತಿಯಲಂದ
ವಿಮಲಾತ್ಮರಿಗೊಲಿವ ಸದ್ಗುಣಧಾಮ ಗೋವಿಂದಗೊಂದಿಸುವೆ।
ಸಾಮಜಪ್ರೀಯ ಗುರುಗಳಂತ
ರ್ಯಾಮಿ ಶ್ರೀ ಗುರು ಇಂದಿರೇಶನೆ
ಪ್ರೇಮದಿಂದಲಿ ಎಮಗೆ ಸಲಿಸಲಿ ಕಾಮಿತಾರ್ಥಂಗಳಾ ॥ ೨೪ ॥

ಇಂತು ಇಭರಾಮಪುರ ನಿಲಯ ಶ್ರೀ ಕೃಷ್ಣಾರ್ಯ ಕಥಾಮೃತಸಾರ
ಭಕ್ತಿ ಸಂಧಿ ಮುಗಿದುದು.

॥ ಶ್ರೀ ಮಧ್ವೇಶ ಕೃಷ್ಣಾರ್ಪಣಮಸ್ತು ॥

